# ಕರ್ನಾಟಕ ವಿಧಾನಸಭೆ

ಹದಿನಾಲ್ಕನೇ ವಿಧಾನಸಭೆ
ಒಂಬತ್ತನೇ ಅಧಿವೇಶನ
(ಮುಂದುವರೆದ ಉಪವೇಶನಗಳು)

## ಕಾರ್ಯಕಲಾಪಗಳ ಪಟ್ಟಿ

ಗುರುವಾರ, ದಿನಾಂಕ 31ನೇ ಮಾರ್ಚ್, 2016
(ಸಮಯ: ಬೆಳಗ್ಗೆ 10.00 ಗಂಟೆ)

-----

### 1. ಕಾರ್ಯದರ್ಶಿಯವರ ವರದಿ

**ಕಾರ್ಯದರ್ಶಿಯವರು:-**

ಕಳೆದ ಅಧಿವೇಶನದಲ್ಲಿ ವರದಿಯನ್ನು ಒಪ್ಪಿಸಿದ ನಂತರ ರಾಷ್ಟ್ರಪತಿ / ರಾಜ್ಯಪಾಲರಿಂದ ಒಪ್ಪಿಗೆ ಪಡೆದ ವಿಧೇಯಕಗಳ ಪಟ್ಟಿಯನ್ನು ಸಭೆಯ ಮುಂದೆ ಮಂಡಿಸುವುದು.

### 2. ಪ್ರಶ್ನೋತ್ತರ

**ಅ) ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು : ಹನ್ನೆರಡನೇ ಪಟ್ಟಿ.**

**ಆ) ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆಗಳು : ಹನ್ನೆರಡನೇ ಪಟ್ಟಿ.**

### 3. ನಿಯಮ 69ರ ಮೇರೆಗೆ ಸಾರ್ವಜನಿಕ ಮಹತ್ವದ ಜರೂರು ವಿಷಯದ ಬಗ್ಗೆ ಅಲ್ಪ ಕಾಲಾವಧಿ ಚರ್ಚೆ

1. **ಶ್ರೀಯುತರುಗಳಾದ ಜಗದೀಶ್ ಶೆಟ್ಟರ್, ಆರ್. ಅಶೋಕ್, ಡಾ|| ಸಿ.ಎನ್. ಅಶ್ವತ್ಥನಾರಾಯಣ, ಎಸ್.ಆರ್.ವಿಶ್ವನಾಥ್, ಎಸ್.ಮುನಿರಾಜು ಹಾಗೂ ಇತರರು** – ಭೂಸ್ವಾಧೀನವಿಲ್ಲದೆ ಸರ್.ಎಂ.ವಿಶ್ವೇಶ್ವರಯ್ಯ, ಜ್ಞಾನಭಾರತಿ, ಬನಶಂಕರಿ 6ನೇ ಹಂತ ಹಾಗೂ ನಾಡಪ್ರಭು ಕೆಂಪೇಗೌಡ ಬಡಾವಣೆಗಳಿಗೆ ಮೂಲಭೂತ ಸೌಲಭ್ಯಕ್ಕಾಗಿ ಉಪಯೋಗಿಸಿಕೊಂಡ ಜಮೀನುಗಳಿಗೆ ಬದಲಾಗಿ ಕಾನೂನು ಬಾಹಿರವಾಗಿ ಅಭಿವೃದ್ಧಿಪಡಿಸಿದ ನಿವೇಶನಗಳನ್ನು ಬಿಡಿಎ ನಿಯಾಮಾವಳಿಗಳನ್ನು ಗಾಳಿಗೆ ತೂರಿ ಹಂಚಿಕೆ ಮಾಡುತ್ತಿರುವುದು ಹಾಗೂ ಭೂಸ್ವಾಧೀನ ಪಡಿಸಿಕೊಂಡ ಪ್ರಕರಣಗಳಲ್ಲಿ ಪರಿಹಾರ ನೀಡುವ ವಿಷಯದಲ್ಲಿ ಬಿಡಿಎ ಅಧಿಕಾರಿಗಳು ಮಧ್ಯವರ್ತಿಗಳ ಜೊತೆ ಶಾಮೀಲಾಗಿ ಸಾವಿರಾರು ಕೋಟಿ ನಷ್ಟವುಂಟುಮಾಡಿರುವ ಬಗ್ಗೆ ನೀಡಿರುವ ಸೂಚನೆಯ ಮೇಲೆ ಚರ್ಚೆ.

2. **ಶ್ರೀಯುತರುಗಳಾದ ಸಿ.ಟಿ. ರವಿ, ಬಿ.ಎನ್. ವಿಜಯ್ ಕುಮಾರ್ ಮತ್ತು ವಿಶ್ವೇಶ್ವರ ಹೆಗಡೆ ಕಾಗೇರಿ** ಇವರುಗಳು – ರಾಜ್ಯದ ಹಲವಾರು ವಿಶ್ವವಿದ್ಯಾಲಯಗಳಲ್ಲಿ ಯು.ಜಿ.ಸಿ. ನಿಯಮಗಳ ಉಲ್ಲಂಘನೆ, ವಿವಿಧ ರೀತಿಯ ವ್ಯಾಪಕ ಭ್ರಷ್ಟಾಚಾರ ಪ್ರಕರಣಗಳು, ಅಕ್ರಮಗಳು ಬೆಳಕಿಗೆ ಬಂದಿರುವುದರಿಂದ ಶೈಕ್ಷಣಿಕ ವಾತಾವರಣ ಹದಗೆಟ್ಟಿದ್ದು, ಸಾರ್ವಜನಿಕರು, ವಿದ್ಯಾರ್ಥಿಗಳು ಮತ್ತು ಶಿಕ್ಷಣ ಪರಿಣಿತರು ಆತಂಕಕ್ಕೊಳಗಾಗಿರುವುದರಿಂದ ಸೂಕ್ತ ತಿದ್ದುಪಡಿಯ ಅಗತ್ಯವಿರುವುದರ ಬಗ್ಗೆ ನೀಡಿರುವ ಸೂಚನೆಯ ಮೇಲೆ ಚರ್ಚೆ.

3. **ಶ್ರೀಯುತರುಗಳಾದ ಚಿಕ್ಕಮಾದು, ಸಾ.ರಾ ಮಹೇಶ್, ಈ. ತುಕಾರಾಂ, ಪ್ರತಾಪಗೌಡ ಪಾಟೀಲ್, ತನ್ವೀರ್ ಸೇಠ್ ಹಾಗೂ ನಾರಾಯಣಗೌಡ** ಇವರುಗಳು – ಕರ್ನಾಟಕ ಸರ್ಕಾರವು ನಾಯಕ ಜನಾಂಗದ ಪರ್ಯಾಯ ಪದಗಳಾದ ಪರಿವಾರ ಮತ್ತು ತಳವಾರ ಪದಗಳನ್ನು ಸಂವಿಧಾನ ಬದ್ಧವಾಗಿ ಪರಿಶಿಷ್ಟ ವರ್ಗಕ್ಕೆ ಸೇರಿಸುವಂತೆ ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಮಾಡಲಾಗಿದ್ದು, ಇದುವರೆವಿಗೂ ಕ್ರಮ ಕೈಗೊಳ್ಳದೇ ಇರುವುದರಿಂದ ಸದರಿ ಜನಾಂಗದವರು ಜಾತಿ ದೃಢೀಕರಣ ಪತ್ರವನ್ನು ಪಡೆಯಲು ಆಗುತ್ತಿರುವ ತೊಂದರೆಗಳ ಬಗ್ಗೆ ನೀಡಿರುವ ಸೂಚನೆಯ ಮೇಲೆ ಚರ್ಚೆ.

4. **ಶ್ರೀಯುತರುಗಳಾದ ಅರಬೈಲ್ ಶಿವರಾಮ ಹೆಬ್ಬಾರ, ಮಂಕಾಳ ಸುಬ್ಬ ವೈದ್ಯ ಮತ್ತು ಶ್ರೀಮತಿ ಶಾರದಾ ಮೋಹನ್‌ಶೆಟ್ಟಿ** ಇವರುಗಳು – ಅನುಸೂಚಿತ ಬುಡಕಟ್ಟು ಹಾಗೂ ಇತರೆ ಪಾರಂಪರಿಕ ಅರಣ್ಯವಾಸಿಗಳ ಅಧಿನಿಯಮ 2006ರ ಕಾನೂನನ್ನು ಸಮರ್ಪಕವಾಗಿ ಆಚರಣೆಗೆ ತರದೇ ಇರುವುದರ ಬಗ್ಗೆ ನೀಡಿರುವ ಸೂಚನೆಯ ಮೇಲೆ ಚರ್ಚೆ.

5. **ಶ್ರೀಯುತರುಗಳಾದ ಸಾ.ರಾ ಮಹೇಶ್** ಇವರು – ಕೆ.ಆರ್. ನಗರ ತಾಲ್ಲೂಕು, ಚುಂಚನಕಟ್ಟೆಯ ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆಯನ್ನು ಪುನರಾರಂಭಿಸುವ ಬಗ್ಗೆ ನೀಡಿರುವ ಸೂಚನೆಯ ಮೇಲೆ ಚರ್ಚೆ.

6. **ಶ್ರೀಯುತರುಗಳಾದ ಎಂ.ಟಿ. ಕೃಷ್ಣಪ್ಪ, ಎನ್. ಹೆಚ್. ಕೋನರಡ್ಡಿ, ಕೆ.ಎಂ. ತಿಮ್ಮರಾಯಪ್ಪ, ಎಸ್. ಭೀಮಾನಾಯಕ್ ಹಾಗೂ** ಇತರರು – ರಾಜ್ಯ ಹೆದ್ದಾರಿ ಯೋಜನೆಯಡಿಯ ಕಾಮಗಾರಿಯಲ್ಲಿ ಯೋಜನಾಧಿಕಾರಿಗಳು ಗುತ್ತಿಗೆದಾರರೊಂದಿಗೆ ಶಾಮೀಲಾಗಿ ಪ್ಯಾಕೇಜ್ ಮಾದರಿಯಲ್ಲಿ ಟೆಂಡರ್‌ಗಳನ್ನು ಕರೆಯದೆ ತಾಲ್ಲೂಕುವಾರು ಪ್ರತ್ಯೇಕವಾಗಿ ಟೆಂಡರ್ ಕರೆದಿದ್ದಲ್ಲಿ ಸರ್ಕಾರಕ್ಕೆ ಕೋಟ್ಯಾಂತರ ರೂಪಾಯಿಗಳ ಹಣ ಉಳಿತಾಯವಾಗುತ್ತಿದ್ದುದರ ಬಗ್ಗೆ ನೀಡಿರುವ ಸೂಚನೆಯ ಮೇಲೆ ಚರ್ಚೆ.

.....3

## 4. ವರದಿಗಳನ್ನೊಪ್ಪಿಸುವುದು

1. **ಶ್ರೀ ಎನ್.ಹೆಚ್. ಶಿವಶಂಕರ ರೆಡ್ಡಿ** (ಉಪ ಸಭಾಧ್ಯಕ್ಷರು ಹಾಗೂ ಅಧ್ಯಕ್ಷರು, ಖಾಸಗಿ ಸದಸ್ಯರುಗಳ ವಿಧೇಯಕ ಹಾಗೂ ನಿರ್ಣಯಗಳ ಸಮಿತಿ) ಅವರು - 2015-16ನೇ ಸಾಲಿನ ಖಾಸಗಿ ಸದಸ್ಯರುಗಳ ವಿಧೇಯಕ ಹಾಗೂ ನಿರ್ಣಯಗಳ ಸಮಿತಿಯ ಎಂಟನೇ ವರದಿಯನ್ನು ಒಪ್ಪಿಸುವುದು.

2. **ಶ್ರೀ ಪಿ.ಎಂ.ನರೇಂದ್ರ ಸ್ವಾಮಿ** (ಅಧ್ಯಕ್ಷರು, ಕರ್ನಾಟಕ ವಿಧಾನಮಂಡಲದ ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಗಳ ಕಲ್ಯಾಣ ಸಮಿತಿ) ಅವರು – ಕರ್ನಾಟಕ ವಿಧಾನಮಂಡಲದ ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಗಳ ಕಲ್ಯಾಣ ಸಮಿತಿಯ 2015-16ನೇ ಸಾಲಿನ 4ನೇ ವರದಿಯನ್ನು ಒಪ್ಪಿಸುವುದು.

## 5.ಅರ್ಜಿಯನ್ನು ಒಪ್ಪಿಸುವುದು

**ಶ್ರೀ ಎನ್.ಹೆಚ್.ಶಿವಶಂಕರರೆಡ್ಡಿ** (ಮಾನ್ಯ ಉಪ ಸಭಾಧ್ಯಕ್ಷರು ಹಾಗೂ ಅಧ್ಯಕ್ಷರು, ಅರ್ಜಿಗಳ ಸಮಿತಿ) ಅವರು ದಿನಗೂಲಿ / ಹೊರಗುತ್ತಿಗೆ ಆಧಾರದ ಮೇಲೆ ಕೆಲಸ ನಿರ್ವಹಿಸುತ್ತಿರುವ ನೌಕರರನ್ನು ಖಾಯಂಗೊಳಿಸುವ ಬಗ್ಗೆ ಅರ್ಜಿಯನ್ನು ಒಪ್ಪಿಸುವುದು.

## 6. ಹಕ್ಕುಚ್ಯುತಿ ಸೂಚನೆಗಳು

1. **ಶ್ರೀ ಕೆ.ಬಿ.ಕೋಳಿವಾಡ** (ಅಧ್ಯಕ್ಷರು, ಬೆಂಗಳೂರು ಸುತ್ತಮುತ್ತಲಿನ ಕೆರೆಗಳ ರಕ್ಷಣೆ ಹಾಗೂ ಒತ್ತುವರಿಗೆ ಸಂಬಂಧಪಟ್ಟಂತೆ ತನಿಖೆ ನಡೆಸಿ ವರದಿ ನೀಡುವ ಸಂಬಂಧ ರಚಿಸಲಾಗಿರುವ ಸದನ ಸಮಿತಿ ಹಾಗೂ ಅಧ್ಯಕ್ಷರು, ಹಕ್ಕುಬಾಧ್ಯತಾ ಸಮಿತಿ) ಇವರು, ಈ ಕೆಳಕಂಡ ಹಕ್ಕುಚ್ಯುತಿ ಸೂಚನೆಗಳನ್ನು ಪ್ರಸ್ತಾಪಿಸುವುದು.

   **ಅ. ಶ್ರೀ ಎಸ್.ಆರ್.ಹಿರೇಮಠ್** ರವರು ಆಧಾರ ರಹಿತ ಆರೋಪಗಳನ್ನು ಮಾಡುತ್ತಾ ಪತ್ರಿಕಾಗೋಷ್ಠಿಗಳನ್ನು ನಡೆಸಿ ಹಕ್ಕುಬಾಧ್ಯತಾ ಸಮಿತಿ ಹಾಗೂ ಅಧ್ಯಕ್ಷರ ವಿರುದ್ಧ ನೀಡುತ್ತಿರುವ ಹೇಳಿಕೆಗಳು ಸಮಿತಿಯ ಹಕ್ಕಿಗೆ ಚ್ಯುತಿಯುಂಟು ಮಾಡಿರುವ ಬಗ್ಗೆ.

   **ಆ. ಮೆ: ಬ್ರಿಗೇಡ್ ಗ್ರೂಪ್ಸ್ ವಕ್ತಾರರು** ನೀಡಿರುವ ಪತ್ರಿಕಾ ಹೇಳಿಕೆಯು ಸದನ ಸಮಿತಿಯ ಹಕ್ಕಿಗೆ ಚ್ಯುತಿಯುಂಟು ಮಾಡಿರುವ ಬಗ್ಗೆ.

2. **ಶ್ರೀ ಎಂ.ಕೃಷ್ಣಾರೆಡ್ಡಿ** ರವರು ಮುರುಗಮಲ್ಲದ ಅಮ್ಮಾಜಾನ್ ಬಾವಾಜಾನ್ ದರ್ಗಾದ ಸುತ್ತಲಿನ ಕಾಂಪೌಂಡ್ ನಿರ್ಮಾಣ ಕಾಮಗಾರಿಗೆ ಸಂಬಂಧಿಸಿದಂತೆ ಜಿಲ್ಲಾ ನಿರ್ಮಿತಿ ಕೇಂದ್ರದ ಅಧಿಕಾರಿಗಳು ಮತ್ತು ವಕ್ಫ್ ಬೋರ್ಡ್ ಅಧಿಕಾರಿಗಳು ಸ್ಥಳೀಯ ಶಾಸಕರನ್ನು ಕಡೆಗಣಿಸಿ, ಹಕ್ಕುಚ್ಯುತಿಯುಂಟು ಮಾಡಿರುವ ಬಗ್ಗೆ ಪ್ರಸ್ತಾಪಿಸುವುದು.

## 7. ಗಮನ ಸೆಳೆಯುವ ಸೂಚನೆಗಳು

1. **ಶ್ರೀ ಗಣೇಶ್ ಪ್ರಕಾಶ್ ಹುಕ್ಕೇರಿ** ಅವರು – ಬೆಳಗಾವಿ ಜಿಲ್ಲೆ, ಚಿಕ್ಕೋಡಿ ಪಟ್ಟಣದಲ್ಲಿ ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರಕ್ಕೆ ಜಾಗ ಮಂಜೂರು ಮಾಡಲು ಆಗುತ್ತಿರುವ ವಿಳಂಬದ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

2. **ಶ್ರೀ ಕೆ.ಆರ್.ರಮೇಶ್ ಕುಮಾರ್** ಅವರು – ರಾಜ್ಯದಲ್ಲಿ ಮಹಾತ್ಮಗಾಂಧಿ ಉದ್ಯೋಗ ಖಾತ್ರಿ ಯೋಜನೆಯಡಿ ಕಾರ್ಯನಿರ್ವಹಿಸುತ್ತಿರುವ ಕೃಷಿ ಕಾರ್ಮಿಕರ ಖಾತೆಗೆ ಜಮಾ ಮಾಡಲ್ಪಡುವ ವೇತನವನ್ನು ಅವರ ಸಾಲದ ಬಾಬ್ತುಗಳ ವಸೂಲಿಗಾಗಿ ಬ್ಯಾಂಕಿನವರು ವೇತನವನ್ನು ತಲುಪದಂತೆ ಮಾಡುತ್ತಿರುವ ವಿಷಯದ ಬಗ್ಗೆ ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಗಮನ ಸೆಳೆಯುವುದು.

3. **ಶ್ರೀ ನಾರಾಯಣ ಗೌಡ** ಅವರು – ಮಂಡ್ಯ ಜಿಲ್ಲೆ, ಕೆ.ಆರ್.ಪೇಟೆಯ ಪಟ್ಟಣದ ಹೇಮಾವತಿ ಬಡಾವಣೆ ಮತ್ತು ಟಿ.ಬಿ.ಬಡಾವಣೆಯ ನಿವೇಶನ ಹಂಚಿಕೆ ಅಕ್ರಮಕ್ಕೆ ಸಂಬಂಧಿಸಿದಂತೆ 1983 ರಿಂದ 2008 ರವರೆಗಿನ ಅವಧಿಯಲ್ಲಿ ಇದ್ದಂತಹ ಪಟ್ಟಣ ಪಂಚಾಯಿತಿಯ ಪ್ರಧಾನರು, ಪುರಸಭೆಯ ಅಧ್ಯಕ್ಷರುಗಳು ಹಾಗೂ ಸಂಬಂಧಿಸಿದ ಇತರ ಅಧಿಕಾರಿಗಳ ವಿರುದ್ಧ ಕ್ರಿಮಿನಲ್ ಮೊಕದ್ದಮೆ ವಿಷಯವಾಗಿ ಆಗುತ್ತಿರುವ ವಿಳಂಬಕ್ಕೆ ಕಾರಣರಾಗಿರುವವರ ವಿರುದ್ಧ ಕ್ರಮ ಕೈಗೊಳ್ಳುವುದು ಹಾಗೂ ಎಫ್.ಐ.ಆರ್.ದಾಖಲಾಗಿರುವ ಪ್ರಕರಣದಲ್ಲಿನ ಸಂಬಂಧಿಸಿದವರ ವಿಚಾರಣೆ ನಡೆಸಿ ಕೂಡಲೇ ಆರೋಪ ಪಟ್ಟಿಯನ್ನು ಸಲ್ಲಿಸುವ ಕುರಿತು ಮಾನ್ಯ ಗೃಹ ಸಚಿವರ ಗಮನ ಸೆಳೆಯುವುದು.

4. **ಶ್ರೀ ಎಂ.ಕೃಷ್ಣಾರೆಡ್ಡಿ** ಅವರು – ಚಿಕ್ಕಬಳ್ಳಾಪುರ ಜಿಲ್ಲೆ ಚಿಂತಾಮಣಿ ತಾಲ್ಲೂಕಿನಲ್ಲಿ ರೋನೋ ಚಂಡಮಾರುತದ ಅಬ್ಬರದಿಂದ ಜನ, ಜಾನುವಾರುಗಳು, ಬೆಳೆದ ಬೆಳೆ ಹಾಗೂ ಮೂಲಭೂತ ಸೌಲಭ್ಯಗಳಿಗೆ ಉಂಟಾಗಿರುವ ಹಾನಿಗೆ ಸಂಬಂಧಿಸಿದಂತೆ ಪರಿಹಾರ ಕಾರ್ಯಗಳಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

5. **ಶ್ರೀ ಎಸ್.ಎನ್.ಸುಬ್ಬಾರೆಡ್ಡಿ** ಅವರು – ಚಿಕ್ಕಬಳ್ಳಾಪುರ ಜಿಲ್ಲೆ, ಗುಡಿಬಂಡೆ ತಾಲ್ಲೂಕು, ಸೋಮ್ಲಾಪುರ ಗ್ರಾಮದ ಸುಬ್ಬಯ್ಯನಕುಂಟೆ ಕೆರೆಗೆ ಅಡ್ಡಲಾಗಿ ಅಣೆಕಟ್ಟು ನಿರ್ಮಾಣ ಮಾಡುವ ಬಗ್ಗೆ ಮಾನ್ಯ ಸಣ್ಣ ನೀರಾವರಿ ಸಚಿವರ ಗಮನ ಸೆಳೆಯುವುದು.

6. **ಶ್ರೀ ಎನ್.ಚೆಲುವರಾಯಸ್ವಾಮಿ** ಅವರು – ಮಂಡ್ಯದಲ್ಲಿ ಸಿ.ಎಫ್.ಟಿ.ಆರ್.ಐ ಸಹಕಾರದೊಂದಿಗೆ ಸಂರಕ್ಷಿತ ಬಾಟಲ್ ಮಾಡಿದ ಕಬ್ಬಿನ ಹಾಲಿನ ಉತ್ಪಾದನಾ ಘಟಕವನ್ನು ಸ್ಥಾಪಿಸುವ ಬಗ್ಗೆ ಮಾನ್ಯ ಸಣ್ಣ ಕೈಗಾರಿಕೆ ಸಚಿವರ ಗಮನ ಸೆಳೆಯುವುದು.

.....5

7. **ಶ್ರೀ ಎಸ್.ಆರ್. ಶ್ರೀನಿವಾಸ್** ಅವರು – ಗುಬ್ಬಿ – ಸಿ.ಎಸ್. ಪುರ ರಾಜ್ಯ ಹೆದ್ದಾರಿ – 84ರ ರಸ್ತೆ ಅಭಿವೃದ್ಧಿಗೆ ಕೆಶಿಫ್ ವತಿಯಿಂದ ಆಡಳಿತಾತ್ಮಕ ಮಂಜೂರಾತಿ ನೀಡಿ ಅನುದಾನ ಬಿಡುಗಡೆಯಾಗಿರುವುದರಿಂದ ಕೂಡಲೇ ಕಾಮಗಾರಿಯನ್ನು ಪ್ರಾರಂಭಿಸುವ ಬಗ್ಗೆ ಮಾನ್ಯ ಲೋಕೋಪಯೋಗಿ ಸಚಿವರ ಗಮನ ಸೆಳೆಯುವುದು.

8. **ಶ್ರೀ ಕೆ.ಎಸ್.ಪುಟ್ಟಣ್ಣಯ್ಯ** ಅವರು – ಮುಜರಾಯಿ ಇಲಾಖೆಯ ವಶಕ್ಕೆ ತೆಗೆದುಕೊಂಡಿರುವ ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕಿನ ಆರತಿ ಉಕ್ಕಡ ಗ್ರಾಮದಲ್ಲಿರುವ ಅತ್ಯಂತ ಹಿಂದುಳಿದ ಬೆಸ್ತರ ಜನಾಂಗದವರು ಪೂಜೆ ಮಾಡುತ್ತಿರುವ ಅಹಲ್ಯದೇವಿ ದೇವಸ್ಥಾನವನ್ನು ಪುನ: ಗ್ರಾಮದ ಸಮಿತಿಗೆ ಬಿಟ್ಟುಕೊಡುವ ಬಗ್ಗೆ ಮಾನ್ಯ ಅಬಕಾರಿ ಮತ್ತು ಮುಜರಾಯಿ ಸಚಿವರ ಗಮನ ಸೆಳೆಯುವುದು.

9. **ಡಾ.ಸಿ.ಎನ್.ಅಶ್ವಥ್ ನಾರಾಯಣ್** ಅವರು – ರಾಜ್ಯದಲ್ಲಿ ಕೇಂದ್ರ ಪುರಸ್ಕೃತ ಪ್ರಧಾನ ಮಂತ್ರಿ ಆವಾಸ್ ಯೋಜನೆಯ ಅನುಷ್ಠಾನದ ಬಗ್ಗೆ ಮಾನ್ಯ ವಸತಿ ಸಚಿವರ ಗಮನ ಸೆಳೆಯುವುದು.

10. **ಶ್ರೀ ಬಿ.ಎನ್.ವಿಜಯ್‌ಕುಮಾರ್** ಅವರು – ದಕ್ಷಿಣ ವಲಯದ ಬಿಬಿಎಂಪಿ ವ್ಯಾಪ್ತಿಯಲ್ಲಿ ಕಸ ವಿಲೇವಾರಿ ನಿಂತು ಹೋಗಿರುವ ಕಾರಣ ಜನಸಾಮಾನ್ಯರ ಆರೋಗ್ಯದ ಮೇಲೆ ದುಷ್ಪರಿಣಾಮ ಉಂಟಾಗುತ್ತಿರುವ ಕಾರಣ ಕೂಡಲೇ ಕಸ ವಿಲೇವಾರಿಗೆ ಸೂಕ್ತ ಕ್ರಮ ಕೈಗೊಳ್ಳುವ ಬಗ್ಗೆ ಮಾನ್ಯ ಬೆಂಗಳೂರು ಅಭಿವೃದ್ಧಿ ಮತ್ತು ನಗರ ಯೋಜನಾ ಸಚಿವರ ಗಮನ ಸೆಳೆಯುವುದು.

11. **ಶ್ರೀ ವೈ.ಎ.ನಾರಾಯಣ ಸ್ವಾಮಿ** ಅವರು – 2004 ರಿಂದ 2009ರವರೆಗೆ ಸರ್ಕಾರಿ ಜಮೀನನ್ನು ಸಂಪೂರ್ಣ ಹಣ ಪಡೆಯದೇ ಹರಾಜು ಮೂಲಕ ಹಂಚಿಕೆ ಮಾಡಲಾಗಿದ್ದು, ಹಂಚಿಕೆದಾರರು ಸದರಿ ಜಮೀನುಗಳನ್ನು ವಿವಿಧ ಉದ್ದೇಶಗಳಿಗೆ ಬಳಸಿಕೊಳ್ಳುವುದರ ಜೊತೆಗೆ ಮಾರಾಟ ಮಾಡುತ್ತಿರುವುದರಿಂದ ಸರ್ಕಾರಕ್ಕೆ ಹಾಗೂ ಸಾರ್ವಜನಿಕರಿಗೆ ನಷ್ಟ ಉಂಟಾಗಿರುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

12. **ಶ್ರೀ ವಿ. ಸುನೀಲ್ ಕುಮಾರ್** ಅವರು – ಕುದುರೆಮುಖ ರಾಷ್ಟ್ರೀಯ ಉದ್ಯಾನವನ ವ್ಯಾಪ್ತಿಯಲ್ಲಿ ವಾಸವಾಗಿರುವ ಕುಟುಂಬಗಳ ಪುನರ್ವಸತಿ ಯೋಜನೆ ಬಗ್ಗೆ ಮಾನ್ಯ ಅರಣ್ಯ ಸಚಿವರ ಗಮನ ಸೆಳೆಯುವುದು.

13. **ಡಾ||ಅಜಯ್ ಸಿಂಗ್** ಅವರು – ಜೇವರ್ಗಿ ತಾಲ್ಲೂಕಿನಲ್ಲಿ ಭೀಮಾನದಿ ನೀರು ಸಂಪೂರ್ಣವಾಗಿ ಬತ್ತಿ ಹೋಗಿರುವುದರಿಂದ ಅಲ್ಲಿನ ಜನ ಜಾನುವಾರುಗಳಿಗೆ ಕುಡಿಯುವ ನೀರಿನ ಸಮಸ್ಯೆ ಉಂಟಾಗಿರುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

.....6

14. **ಶ್ರೀ ಸಿ.ಟಿ.ರವಿ** ಅವರು – ಪಶು ವೈದ್ಯರಿಗೆ ಮಾನವ ವೈದ್ಯರಿಗೆ ನೀಡಿದಂತೆ ವಿಶೇಷ ಭತ್ಯೆಗಳನ್ನು ಒದಗಿಸುವಂತೆ ಕೆ.ಎ.ಟಿ. ಶಿಫಾರಸ್ಸು ಮಾಡಿದ್ದರೂ, ಅನುಷ್ಠಾನಗೊಳಸಲು ವಿಳಂಬವಾಗುತ್ತಿರುವ ಬಗ್ಗೆ ಮಾನ್ಯ ಪಶುಸಂಗೋಪನೆ ಮತ್ತು ರೇಷ್ಮೆ ರಾಜ್ಯ ಸಚಿವರ ಗಮನ ಸೆಳೆಯುವುದು.

15. **ಶ್ರೀಯುತರುಗಳಾದ ಈಶ್ವರ್ ಖಂಡ್ರೆ ಮತ್ತು ತನ್ವೀರ್ ಸೇಠ್** ಅವರುಗಳು – ಬೀದರ್ ಜಿಲ್ಲೆಯಲ್ಲಿರುವ ಗವಾನ್ ಎಜುಕೇಷನ್ ಟ್ರಸ್ಟ್ ವತಿಯಿಂದ ನಡೆಯುತ್ತಿದ್ದ ಏಮ್ಸ್ ಪದವಿ ಪೂರ್ವ ಕಾಲೇಜನ್ನು ಪುನರಾರಂಭಿಸಲು ಅನುದಾನ ಸಹಿತವಾಗಿ ಮಾನ್ಯತೆ ನೀಡುವ ಬಗ್ಗೆ ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ರಾಜ್ಯ ಸಚಿವರ ಗಮನ ಸೆಳೆಯುವುದು.

16. **ಶ್ರೀಯುತರುಗಳಾದ ಹೆಚ್.ಸಿ. ಬಾಲಕೃಷ್ಣ, ಎಸ್.ಆರ್.ವಿಶ್ವನಾಥ್ ಮತ್ತು ಎಂ.ಕೃಷ್ಣಪ್ಪ** ಅವರುಗಳು – ಬೆಂಗಳೂರು ನಗರ ಜಿಲ್ಲೆ ಮತ್ತು ಗ್ರಾಮಾಂತರ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ವಿವಿಧ ಅಭಿವೃದ್ಧಿ ಪ್ರಾಧಿಕಾರಗಳಲ್ಲಿ ಸ್ಥಳೀಯ ಶಾಸಕರಿಗೆ ಸದಸ್ಯರನ್ನಾಗಿ ನೇಮಕ ಮಾಡುವ ಕುರಿತು ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

17. **ಶ್ರೀಯುತರುಗಳಾದ ಹೆಚ್.ಕೆ. ಕುಮಾರಸ್ವಾಮಿ, ಸಿ.ಎನ್. ಬಾಲಕೃಷ್ಣ, ಹೆಚ್.ಡಿ. ರೇವಣ್ಣ** ಅವರುಗಳು – ಹಾಸನ ಜಿಲ್ಲೆಯ, ಹಾಸನ ನಗರ ಹಾಗೂ ಸುತ್ತಮುತ್ತಲಿನ 5 ಕಿ.ಮೀಟರ್ ವ್ಯಾಪ್ತಿಯ ಎಲ್ಲಾ ತಾಲ್ಲೂಕು ಕೇಂದ್ರಗಳ ವ್ಯಾಪ್ತಿಯಲ್ಲಿ ಕಂದಾಯ ಇಲಾಖೆಗೆ ಸಂಬಂಧಿಸಿದ ಅಧಿಕಾರಿಗಳು ರಿಯಲ್ ಎಸ್ಟೇಟ್ ದಂಧೆಕೋರರ ಜೊತೆ ಶಾಮೀಲಾಗಿ ಕಾನೂನು ಬಾಹಿರವಾಗಿ ನಿವೇಶನಗಳನ್ನು ಮಾರ್ಪಡಿಸಿ ಸಾರ್ವಜನಿಕರಿಗೆ ಮಾರಾಟ ಮಾಡಿ ಸರ್ಕಾರಕ್ಕೆ ಲಕ್ಷಾಂತರ ರೂಪಾಯಿಗಳನ್ನು ವಂಚನೆ ಮಾಡುತ್ತಿರುವ ಹಾಗೂ ಇದಕ್ಕೆ ಕುಮ್ಮಕ್ಕು ನೀಡುತ್ತಿರುವ ಅಧಿಕಾರಿಗಳ ವಿರುದ್ಧ ಕ್ರಮಕೈಗೊಳ್ಳುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

18. **ಶ್ರೀಯುತರುಗಳಾದ ಹೆಚ್.ಎಸ್. ಪ್ರಕಾಶ್, ಹೆಚ್.ಕೆ. ಕುಮಾರಸ್ವಾಮಿ ಮತ್ತು ಹೆಚ್.ಡಿ.ರೇವಣ್ಣ** ಅವರುಗಳು – ಹಾಸನ ಜಿಲ್ಲೆ, ಹಾಸನ ತಾಲ್ಲೂಕಿನ ಅರಣ್ಯಗಳಲ್ಲಿ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು ಮತ್ತು ವಲಯ ಅರಣ್ಯಾಧಿಕಾರಿಗಳು ಬೆಲೆ ಬಾಳುವ ಮರಗಳ ಕಳ್ಳ ಸಾಗಾಣಿಕೆಯಲ್ಲಿ ಮರಗಳ್ಳರೊಂದಿಗೆ ಶಾಮೀಲಾಗಿ ಸರ್ಕಾರದ ಬೊಕ್ಕಸಕ್ಕೆ ನಷ್ಟವುಂಟು ಮಾಡುತ್ತಿರುವವರ ಮೇಲೆ ಕ್ರಮಕೈಗೊಳ್ಳುವ ಬಗ್ಗೆ ಮಾನ್ಯ ಅರಣ್ಯ ಸಚಿವರ ಗಮನ ಸೆಳೆಯುವುದು.

19. **ಶ್ರೀ ಬಿ.ಬಿ. ನಿಂಗಯ್ಯ** ಅವರು – ನೀರಾವರಿ ಯೋಜನಾ ವಲಯ, ಕಾಡಾ, ಕಲ್ಬುರ್ಗಿ ಇಲ್ಲಿನ ಅಧ್ಯಕ್ಷರು ಮತ್ತು ಹಿಂದಿನ ಮುಖ್ಯ ಲೆಕ್ಕಾಧಿಕಾರಿಗಳು ಸೇರಿ 2010ನೇ ಸಾಲಿನಿಂದ ಲಕ್ಷಾಂತರ ರೂಪಾಯಿಗಳನ್ನು ದುರುಪಯೋಗ ಮಾಡಿಕೊಂಡಿದ್ದು ಅಲ್ಲದೆ, ಯಾವುದೇ ಬಿಲ್ಲುಗಳಿಲ್ಲದೆ ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್‌ನಿಂದ ಹಣ ಡ್ರಾ ಮಾಡಿ ದುರುಪಯೋಗ ಮಾಡಿರುವ ಬಗ್ಗೆ ಸಮಗ್ರ ತನಿಖೆ ನಡೆಸಿ ತಪ್ಪಿತಸ್ಥರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ ಮಾನ್ಯ ಭಾರಿ ಮತ್ತು ಮಧ್ಯಮ ನೀರಾವರಿ ಸಚಿವರ ಗಮನ ಸೆಳೆಯುವುದು.

.....7

20.**ಶ್ರೀ ಸಾ.ರಾ. ಮಹೇಶ್** ಅವರು – ಕಾವೇರಿ ನೀರಾವರಿ ನಿಗಮದವರು ಹೇಮಾವತಿ ನದಿಯಿಂದ ಹಾಗೂ ಎಡದಂಡೆ ನಾಲೆಗಳಲ್ಲಿ ಹೊಸ ಏತನೀರಾವರಿ ಯೋಜನೆಗಳನ್ನು ಕೈಗೊಂಡು ಹಾಲಿ ಇರುವ ನಾಲೆಗಳ ಮೂಲಕ ರೈತರ ಅಚ್ಚುಕಟ್ಟುಗಳಿಗೆ ಸಮರ್ಪಕವಾಗಿ ನೀರನ್ನು ಒದಗಿಸದೆ ಹಾಗೂ ದನಕರುಗಳಿಗೆ ನೀರನ್ನು ಒದಗಿಸದೆ ಹೊಸ ಏತನೀರಾವರಿ ಯೋಜನೆಗಳನ್ನು ಕೈಗೊಳ್ಳುತ್ತೇವೆಂದು ಹೇಳಿ ಸರ್ಕಾರಕ್ಕೆ ನೂರಾರು ಕೋಟಿಗಳ ನಷ್ಟವುಂಟು ಮಾಡುತ್ತಿರುವ ಅಧಿಕಾರಿಗಳ ಮೇಲೆ ಕ್ರಮಕೈಗೊಳ್ಳುವುದು ಹಾಗೂ ನೀರನ್ನು ಹರಿಸದೆ ರೈತರ ಕೋಟ್ಯಾಂತರ ಬೆಲೆಯ ಬೆಳೆಯು ನಷ್ಟವುಂಟು ಮಾಡುತ್ತಿರುವ ವಿಷಯದ ಬಗ್ಗೆ ಮಾನ್ಯ ಭಾರಿ ಮತ್ತು ಮಧ್ಯಮ ನೀರಾವರಿ ಸಚಿವರ ಗಮನ ಸೆಳೆಯುವುದು.

21.**ಶ್ರೀ ದೊಡ್ಡನಗೌಡ ಹೆಚ್.ಪಾಟೀಲ್** ಅವರು – ಕುಷ್ಟಗಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಗೆ ಬರುವ ಚಿಕ್ಕಗೊಣ್ಣಾಗರ ಮತ್ತು ವಾರೇಕಲ್ ಗ್ರಾಮಗಳವರು ಗ್ರಾಮ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ ಮತ್ತು ಜಿಲ್ಲಾ ಪಂಚಾಯಿತಿ ಚುನಾವಣೆಯನ್ನು ಬಹಿಷ್ಕರಿಸಿರುವುದರಿಂದ ಸರ್ಕಾರದ ಸೌಲಭ್ಯಗಳಿಂದ ವಂಚಿತರಾಗಿರುವುದಲ್ಲದೆ ತೀವ್ರವಾದ ಬರಗಾಲ ಮತ್ತು ಕುಡಿಯುವ ನೀರಿನ ಸಮಸ್ಯೆ ಎದುರಿಸುತ್ತಿರುವ ಬಗ್ಗೆ ಹಾಗೂ ಈ ಗ್ರಾಮಗಳನ್ನು ಹಿರೇಗೊಣ್ಣಾಗರ ಗ್ರಾಮ ಪಂಚಾಯಿತಿಗೆ ಮರು ಸೇರ್ಪಡೆಗೊಳಿಸುವ ಕುರಿತು ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಗಮನ ಸೆಳೆಯುವುದು.

22.**ಶ್ರೀ ಹೆಚ್.ಡಿ.ರೇವಣ್ಣ** ಅವರು – ಹಾಸನದ ಗಂಧದಕೋಟೆಯಲ್ಲಿ 2016-17ನೇ ಶೈಕ್ಷಣಿಕ ಸಾಲಿಗೆ ಮಂಜೂರಾಗಿರುವ ಹೆಚ್ಚುವರಿ ಮಹಿಳಾ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ ಅವಶ್ಯಕ ಬೋಧಕ / ಬೋಧಕೇತರ ಸಿಬ್ಬಂದಿಗಳನ್ನು ಈವರೆವಿಗೂ ನೇಮಿಸದೇ ಇರುವುದರಿಂದ ವಿದ್ಯಾರ್ಥಿನಿಯರ ವ್ಯಾಸಂಗಕ್ಕೆ ತೊಂದರೆಯಾಗಿರುವ ವಿಷಯದ ಬಗ್ಗೆ ಮಾನ್ಯ ಕಾನೂನು, ಸಂಸದೀಯ ವ್ಯವಹಾರಗಳು ಹಾಗೂ ಉನ್ನತ ಶಿಕ್ಷಣ ಸಚಿವರ ಗಮನ ಸೆಳೆಯುವುದು.

23.**ಶ್ರೀ ಸಿ.ಟಿ.ರವಿ** ಅವರು – ಗುತ್ತಿಗೆ ನಿಯಂತ್ರಣ ಕಾಯ್ದೆ ಉಲ್ಲಂಘಿಸಿ ಕರ್ನಾಟಕ ರಾಜ್ಯ ಆರೋಗ್ಯ ಕವಚ 108 ಅಂಬುಲೆನ್ಸ್ ಸೇವೆಯ ಗುತ್ತಿಗೆಯನ್ನು ಹೈದರಾಬಾದ್ ಮೂಲದ ಜಿವಿಕೆ ಸಂಸ್ಥೆಗೆ ನೀಡಿರುವುದರಿಂದ ಗುತ್ತಿಗೆ ಪರವಾನಿಗೆಯನ್ನು ಕಾರ್ಮಿಕ ಇಲಾಖೆಯಿಂದ ಪಡೆಯದಿರುವುದು ಹಾಗೂ ರಾಜ್ಯ ಸರ್ಕಾರದೊಂದಿಗೆ ಮಾಡಿಕೊಂಡಿರುವ ಎಲ್ಲಾ ಷರತ್ತುಗಳನ್ನು ಪಾಲಿಸದಿರುವುದು ಕಂಡುಬಂದಿರುವ ಬಗ್ಗೆ ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರ ಗಮನ ಸೆಳೆಯುವುದು.

24.**ಶ್ರೀ ಜಿ.ಹೆಚ್. ಶ್ರೀನಿವಾಸ್** ಅವರು – ತರೀಕೆರೆ ವಿಧಾನಸಭಾ ಕ್ಷೇತ್ರದ ಗಡಿಹಳ್ಳಿ ತಾಲ್ಲೂಕು ಪಂಚಾಯಿತಿ ಚುನಾವಣಾ ಕ್ಷೇತ್ರಕ್ಕೆ ಆಯ್ಕೆಯಾದ ಕಾಂಗ್ರೆಸ್ ಪಕ್ಷದ ಅಭ್ಯರ್ಥಿ ಶ್ರೀ ಜಿ.ವಿ.ಕೃಷ್ಣಮೂರ್ತಿಯವರು ನಾಪತ್ತೆಯಾಗಿರುವ ಬಗ್ಗೆ ಮಾನ್ಯ ಗೃಹ ಸಚಿವರ ಗಮನ ಸೆಳೆಯುವುದು.

.....8

25.**ಶ್ರೀ ಕೆ.ಎಂ.ತಿಮ್ಮರಾಯಪ್ಪ** ಅವರು – ತುಂಗಭದ್ರಾ ಡ್ಯಾಂ ನಿಂದ ಪೈಪ್ ಲೈನ್ ಮೂಲಕ ಮೊಳಕಾಲ್ಮೂರು, ಚಳ್ಳಕೆರೆ ಮತ್ತು ಪಾವಗಡ ತಾಲ್ಲೂಕುಗಳಿಗೆ ಕುಡಿಯುವ ನೀರು ಸರಬರಾಜು ಮಾಡುವ ಯೋಜನೆಯ ಕಾಮಗಾರಿಯನ್ನು ಪ್ರಾರಂಭಿಸುವ ಬಗ್ಗೆ ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಗಮನ ಸೆಳೆಯುವುದು.

26.**ಶ್ರೀ ಎನ್.ಚೆಲುವರಾಯಸ್ವಾಮಿ** ಅವರು – ರಾಜ್ಯದಲ್ಲಿನ ನದಿ ತೀರಗಳ ಅತಿಕ್ರಮಣ ತೆರವು, ನದಿ ಪಾತ್ರದ ಗಡಿಯನ್ನು ಗುರುತಿಸಿ ಮರದ ತೋಪುಗಳನ್ನು ಬೆಳೆಸುವುದು, ನದಿಯ ಮಾಲಿನ್ಯವನ್ನು ತಡೆಗಟ್ಟುವುದು, ನದಿ ಮಾಲಿನ್ಯಕ್ಕೆ ಕಾರಣರಾದವರ ಮೇಲೆ ಕ್ರಮ ಜರುಗಿಸಲು ಶಾಸನವನ್ನು ತರುವ ಬಗ್ಗೆ ಮಾನ್ಯ ಭಾರಿ ಮತ್ತು ಮಧ್ಯಮ ನೀರಾವರಿ ಸಚಿವರ ಗಮನ ಸೆಳೆಯುವುದು.

27.**ಶ್ರೀ ಹೆಚ್.ಎಸ್.ಶಿವಶಂಕರ್** ಅವರು – ಮುಂಡರಗಿ ತಾಲ್ಲೂಕು ಕಲಕೇರಿ ಗ್ರಾಮ ಪಂಚಾಯಿತಿಯಲ್ಲಿ 2013-14 ಮತ್ತು 2014-15ನೇ ಸಾಲಿನಲ್ಲಿ ನಡೆದಂತಹ ಕಾಮಗಾರಿಗಳಲ್ಲಿ ಆದಂತಹ ಅವ್ಯವಹಾರಗಳಲ್ಲಿ ಭಾಗಿಯಾಗಿರುವವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ ಹೂಡಲು ತನಿಖಾ ವರದಿಯಲ್ಲಿ ಸೂಚಿಸಿರುವ ಬಗ್ಗೆ ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಗಮನ ಸೆಳೆಯುವುದು.

28.**ಶ್ರೀ ಯು.ಬಿ.ಬಣಕಾರ್** ಅವರು - ದಿನಾಂಕ: 28.3.2016 ರಿಂದ ಜಿಲ್ಲಾಧಿಕಾರಿಗಳ ಕಚೇರಿ ಎದುರು ಅನಿರ್ದಿಷ್ಟ ಧರಣಿ ಮಾಡುತ್ತಿರುವ ಹಾವೇರಿ ಜಿಲ್ಲಾ ಸಂಘಟನೆಯ ಸದಸ್ಯರ ಬೇಡಿಕೆಗಳನ್ನು ಈಡೇರಿಸುವ ವಿಷಯದಲ್ಲಿ ಅಧಿಕಾರಿಗಳು ಮತ್ತು ರೈತ ಮುಖಂಡರ ಜೊತೆ ಸಭೆ ನಡೆಸುವುದರ ಬಗ್ಗೆ ಮಾನ್ಯ ಕೃಷಿ ರಾಜ್ಯ ಸಚಿವರ ಗಮನ ಸೆಳೆಯುವುದು.

29.**ಶ್ರೀ ವೈ.ಎ.ನಾರಾಯಣ ಸ್ವಾಮಿ** ಅವರು - ಬೆಂಗಳೂರು ನಗರ ಜಿಲ್ಲೆಯಲ್ಲಿ ಕುಡಿಯುವ ನೀರಿನ ಅಭಾವ ಇರುವುದರಿಂದ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವಿಧಾನಸಭಾ ಕ್ಷೇತ್ರಗಳಲ್ಲಿ ಕೊಳವಿ ಬಾವಿ ಕೊರೆಯಲು ಆದೇಶ ನೀಡುವ ಬಗ್ಗೆ ಮಾನ್ಯ ಬೆಂಗಳೂರು ಅಭಿವೃದ್ಧಿ ಮತ್ತು ನಗರ ಯೋಜನಾ ಸಚಿವರ ಗಮನ ಸೆಳೆಯುವುದು.

30.**ಶ್ರೀ ಕೆ.ಎಸ್.ಪುಟ್ಟಣ್ಣಯ್ಯ** ಅವರು – ಭತ್ತ, ರಾಗಿ, ಜೋಳ, ಸಜ್ಜೆ ಮತ್ತು ಇನ್ನಿತರ ಬೆಳೆಗಳನ್ನು ಹೊರತುಪಡಿಸಿ, 2012-13ರಲ್ಲಿ ಉತ್ಪಾದಿಸಿದ ಕಡಲೆ ಪ್ರಮಾಣಿತ ಬೀಜಗಳಿಗೆ ಮಾತ್ರ ರೂ.1,000 ಗಳಂತೆ ಉತ್ಪಾದನಾ ಪ್ರೋತ್ಸಾಹಧನವನ್ನು ವಿತರಿಸುತ್ತಿರುವುದರ ಬಗ್ಗೆ ಮಾನ್ಯ ಕೃಷಿ ರಾಜ್ಯ ಸಚಿವರ ಗಮನ ಸೆಳೆಯುವುದು.

31.**ಶ್ರೀ ಗುರುಪಾಟೀಲ್ ಶಿರವಾಳ** ಅವರು – ಶಹಾಪುರ ಮಾರುಕಟ್ಟೆ ಮೌಲ್ಯ ಸಮಿತಿಯು 2015-2016ನೇ ಸಾಲಿನ ಸ್ಥಿರಾಸ್ತಿಗಳ ಮೌಲ್ಯವನ್ನು ಶೇ 200% ರಷ್ಟು ಹೆಚ್ಚಿಗೆ ಮಾಡಿರುವ ತೀರ್ಮಾನವನ್ನು ರದ್ದು ಮಾಡಿ ಶೇಕಡ 10% ರಿಂದ ಶೇಕಡ 25% ರವರೆಗೆ ಪರಿಗಣಿಸುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

32.**ಶ್ರೀ ಬಿ.ಎಂ.ನಾಗರಾಜ್** ಅವರು – ರಾಜ್ಯಾದ್ಯಂತ 2009-10ನೇ ಸಾಲಿನಲ್ಲಿ ಬಿದ್ದ ಭಾರಿ ಮಳೆಯಿಂದಾಗಿ ಬಹಳ ಹಾನಿಗೊಳಗಾದ ಪ್ರದೇಶಗಳಲ್ಲಿ ಸಂತ್ರಸ್ಥರಿಗೆ ಸೂರು ಕಲ್ಪಿಸಿಕೊಡಬೇಕೆಂದು ತೀರ್ಮಾನಿಸಿದಂತೆ ಬಳ್ಳಾರಿ ಜಿಲ್ಲೆ ಸಿರುಗುಪ್ಪ ತಾಲೂಕಿನ 16 ಗ್ರಾಮಗಳನ್ನು ಸ್ಥಳಾಂತರಿಸುವುದಲ್ಲದೆ, ಅಪೂರ್ಣವಾಗಿರುವ ಮನೆಗಳ ನಿರ್ಮಾಣ ಕಾಮಗಾರಿಯನ್ನು ಕೂಡಲೇ ಪೂರ್ಣಗೊಳಿಸುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

33.**ಶ್ರೀಯುತರುಗಳಾದ ಸಿ.ಎನ್.ಬಾಲಕೃಷ್ಣ, ಎನ್.ಚೆಲುವರಾಯಸ್ವಾಮಿ, ಹೆಚ್.ಕೆ. ಕುಮಾರಸ್ವಾಮಿ, ಕೆ.ಎಂ ಶಿವಲಿಂಗೇಗೌಡ ಮತ್ತು** ಇತರರು – ಹಾಸನ ಜಿಲ್ಲೆಯ ಹೇಮಾವತಿ ಸಕ್ಕರೆ ಕಾರ್ಖಾನೆ ನಿಯಮಿತ ಶ್ರೀನಿವಾಸಪುರ ಇಲ್ಲಿಗೆ ಹೊಸದಾಗಿ ಸದಸ್ಯತ್ವ ಕೋರಿ ಅರ್ಜಿ ಸಲ್ಲಿಸಿರುವ 4348 ಹೊಸ ಷೇರುದಾರರಿಗೆ ಗುರುತಿನ ಚೀಟಿ ಮತ್ತು ಷೇರು ಪತ್ರವನ್ನು ನೀಡುವ ಬಗ್ಗೆ ಮಾನ್ಯ ಸಹಕಾರ ಮತ್ತು ಸಕ್ಕರೆ ಸಚಿವರ ಗಮನ ಸೆಳೆಯವುದು.

34.**ಶ್ರೀ ಕೆ.ಎಂ.ಶಿವಲಿಂಗೇಗೌಡ** ಅವರು – ಸರ್ಕಾರವು ಉಚಿತವಾಗಿ ವಿತರಣೆ ಮಾಡುತ್ತಿರುವ ಆಹಾರ ಧಾನ್ಯಗಳನ್ನು ಪಡೆಯಲು ಮತ್ತು ಸೀಮೆಎಣ್ಣೆಯನ್ನು ತರಲು ನಾಲ್ಕೈದು ಕಿ.ಮೀ. ಕ್ರಮಿಸಬೇಕಾಗಿರುವುದರಿಂದ ಗ್ರಾಮೀಣ ಭಾಗದ ಜನತೆಗೆ / ಕೂಲಿ ಕಾರ್ಮಿಕರಿಗೆ ಆಗುತ್ತಿರುವ ತೊಂದರೆಯನ್ನು ತಪ್ಪಿಸಲು ಸಬ್‌ಸೆಂಟರ್‌ಗಳನ್ನು ತೆರೆದು ಅದೇ ನ್ಯಾಯಬೆಲೆ ಅಂಗಡಿ ಮಾಲೀಕರಿಂದ ಮಾರಾಟ ಮಾಡಲು ಕ್ರಮ ಕೈಗೊಳ್ಳುವ ವಿಷಯದ ಬಗ್ಗೆ ಮಾನ್ಯ ಆಹಾರ ಮತ್ತು ನಾಗರಿಕ ಸರಬರಾಜು ಸಚಿವರ ಗಮನ ಸೆಳೆಯುವುದು.

## ೮. ಖಾಸಗಿ ಸದಸ್ಯರ ಕಾರ್ಯಕಲಾಪಗಳು

**I. ಖಾಸಗಿ ಸದಸ್ಯರ ವಿಧೇಯಕಗಳನ್ನು ಪರ್ಯಾಲೋಚಿಸುವುದು ಹಾಗೂ ಅಂಗೀಕರಿಸುವುದು**

**(i) ಕರ್ನಾಟಕ ರಾಜ್ಯ ವಿವಾಹ ವಿಧಿವಿಧಾನಗಳ ನಿಯಂತ್ರಣ ವಿಧೇಯಕ, 2015**
**(2015ರ ಖಾಸಗಿ ಸದಸ್ಯರ ವಿಧೇಯಕ-01)**
**ಶ್ರೀ ಕೆ.ಆರ್. ರಮೇಶ್ ಕುಮಾರ್ (ವಿಧಾನ ಸಭಾ ಸದಸ್ಯರು) ಅವರು:-**

ಅ) 2015ನೇ ಸಾಲಿನ ಕರ್ನಾಟಕ **ರಾಜ್ಯ ವಿವಾಹ ವಿಧಿವಿಧಾನಗಳ ನಿಯಂತ್ರಣ ವಿಧೇಯಕ (2015ರ ಖಾಸಗಿ ಸದಸ್ಯರ ವಿಧೇಯಕ-01)** ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

**(ii) ಕರ್ನಾಟಕ ಭೂ ಕಂದಾಯ (ಖಾಸಗಿ ಸದಸ್ಯರ ತಿದ್ದುಪಡಿ) ವಿಧೇಯಕ, 2015**
**(2015ರ ಖಾಸಗಿ ಸದಸ್ಯರ ವಿಧೇಯಕ-02)**
**ಶ್ರೀ ಕೆ. ಶಿವಮೂರ್ತಿ (ವಿಧಾನ ಸಭಾ ಸದಸ್ಯರು) ಅವರು:-**

ಅ) 2015ನೇ ಸಾಲಿನ **ಕರ್ನಾಟಕ ಭೂ ಕಂದಾಯ (2015ರ ಖಾಸಗಿ ಸದಸ್ಯರ ವಿಧೇಯಕ-02)** ವಿಧೇಯಕವನ್ನು ಮಂಡಿಸಲು ಪರ್ಯಾಲೋಚಿಸಬೇಕೆಂದು ಸೂಚಿಸುವುದು.

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

**ಎಸ್. ಮೂರ್ತಿ**
ಕಾರ್ಯದರ್ಶಿ(I/c)

---

**ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ವೆಬ್‌ಸೈಟ್‌ನಲ್ಲಿಯೂ ಸಹ ಪಡೆದುಕೊಳ್ಳಬಹುದು.**
(http://kla.kar.nic.in/assembly/lob/lob.htm)